ಡಾ॥ ಸೂರ್ಯನಾಥ ಕಾಮತ್

# ಬೆಂಗಳೂರಿನ ನವೀಕರಣಕ್ಕೆ ಕಾರಣವಾದ ಪ್ಲೇಗ್ ಪಿಡುಗು

ದುರಂತಗಳೂ ವಿನಾಶಕಾರೀ ಘಟನೆಗಳೂ ಹೊಸ ಹುಟ್ಟಿಗೆ ಕಾರಣವಾಗುತ್ತವೆ. ಲಂಡನ್‌ನ ಮಹಾ ಅಗ್ನಿ ಪ್ರಕರಣ ಲಂಡನ್ ನಗರದ ನವೀಕರಣ, ಸೌಂದರ್ಯ ವರ್ಧನೆಗೆ ಕಾರಣವಾದಂತೆ ೧೮೯೮ರಲ್ಲಿ ಬೆಂಗಳೂರಿನಲ್ಲಿ ಕಾಣಿಸಿಕೊಂಡ ಭಾರೀ ಪ್ಲೇಗ್ ಪಿಡುಗು ಅಪಾರ ಸಾವು ನೋವು ಹಾಗೂ ಸಂಕಷ್ಟ ಪರಂಪರೆಗಳಿಗೆ ಜನರು ಒಳಗಾಗುವಂತೆ ಮಾಡಿದರೂ ಬೆಂಗಳೂರು ಒಂದು ಯೋಜಿತ ನವೀಕೃತ ವಿಶಾಲ ನಗರವಾಗುವುದಕ್ಕೆ ಕಾರಣಭೂತವಾಯಿತು.

ಭಾರತದಲ್ಲೆಲ್ಲ ಮಹಾ ತಲ್ಲಣವನ್ನು ಉಂಟು ಮಾಡಿದ ಪ್ಲೇಗ್ ಪೀಡೆಯು ಬಾರದಂತೆ ತಡೆಯಲು ಹಾಗೂ ಬಂದಲ್ಲಿ ಅದನ್ನು ಎದುರಿಸಲು ಮೈಸೂರು ಸರಕಾರವು ಸಾಕಷ್ಟು ಮುಂಜಾಗ್ರತೆಯ ಕ್ರಮಗಳನ್ನು ೧೮೯೭ರ ಫೆಬ್ರುವರಿಯಿಂದಲೇ ಕೈಗೊಂಡಿತ್ತು. ಪ್ಲೇಗ್ ರೋಗಿಗಳನ್ನು ಗುರುತಿಸಲು, ಅವರನ್ನು ಬೇರ್ಪಡಿಸಲು (ಸೆಗ್ರಿಗೇಶನ್) ಹಾಗೂ ಔಷಧೋಪಚಾರ ನಡೆಸಲು ಸೂಕ್ತ ಸೂಚನೆಗಳನ್ನು ಪೋಲೀಸ್ ಅಧಿಕಾರಿಗಳು, ರೈಲ್ವೇ ಸ್ಟೇಶನ್ ಮಾಸ್ತರರು ಹಾಗೂ ಇತರರಿಗೆ ನೀಡಲಾಗಿತ್ತು. ಅದೇ ತಿಂಗಳಲ್ಲಿ ಸಾಂಕ್ರಾಮಿಕ ರೋಗಗಳ ನಿಯಂತ್ರಣ ನಿಯಮ (೨) ೧೮೯೭ನ್ನೂ ಮಂಜೂರು ಮಾಡಲಾಗಿತ್ತು. ೧೮೯೮ರ ಜನವರಿ ತಿಂಗಳಲ್ಲೇ ಆಗಿನ ಐಜಿಪಿಯಾದ ವಿ. ಪಿ. ಮಾಧವರಾಯರನ್ನು ಪ್ಲೇಗ್ ಕಮೀಶನರ್ ಆಗಿ ನೇಮಿಸಲಾಗಿತ್ತು ಮತ್ತು ಈ ರೀತಿ ಕೈಗೊಂಡ ಮುಂಜಾಗ್ರತಾ ಕ್ರಮಗಳ ಪಟ್ಟಿ ದೊಡ್ಡದು.[1]

ಹೀಗಾದರೂ ೧೮೯೮ರ ಆಗಸ್ಟ್ ೧೫ರಂದು ಹುಬ್ಬಳ್ಳಿಯಿಂದ ಬಂದ ರೈಲ್ವೇ ಅಧಿಕಾರಿಯೊಬ್ಬರ ಅಡಿಗೆಯವನೊಬ್ಬ ಬೆಂಗಳೂರಿನಲ್ಲಿ ಪ್ಲೇಗ್‌ನಿಂದ ತೀರಿಕೊಂಡ. ಗೂಡ್‌ಶೆಡ್ ಪರಿಸರದಲ್ಲಿ ಹಲವು ಮರಣಗಳಾಗಿ, ಆಗಸ್ಟ್ ೨೪ರ ಹೊತ್ತಿಗೆ ೧೭ ಸಾವುಗಳಾಗಿ ನಗರದ ವಿವಿಧ ಬಡಾವಣೆಗಳಿಗೆ ಈ ಸಾಂಕ್ರಾಮಿಕ ಪಿಡುಗು ಹರಡಿ ೧೮೯೯ರ ಜೂನ್ ವರೆಗೆ ೨,೬೬೫ ಮರಣಗಳು ಹಳೆಯ ಬೆಂಗಳೂರು ಪೇಟೆಯಲ್ಲಿ ದಾಖಲಾದವು. ಜೊತೆಗೆ ೩.೩೯೩ ಪ್ಲೇಗ್‌ನಿಂದಾದ ಮರಣಗಳು ದಾಖಲಾಗದೇ ಹೋದವೆಂದು ಸರಕಾರೀ ವರದಿ ಲೆಕ್ಕ ಹಾಕಿದೆ.[2] ನಗರವನ್ನು ತ್ಯಜಿಸಿ ಬೇರ್ಪಡೆ ಶಿಬಿರ(ಸೆಗ್ರಿಗೇಶನ್ ಕ್ಯಾಂಪ್)ಗಳಲ್ಲಿ ಊರ ಹೊರಗೆ ಹೋಗಿ ಇರಲು ಸರಕಾರವು ಜನರನ್ನು ಒತ್ತಾಯಿಸಿದ್ದರಿಂದ ಸಾವಿರಾರು ಜನ ಊರು ಬಿಟ್ಟು ಗ್ರಾಮಾಂತರ ಪ್ರದೇಶಗಳಿಗೆ ಓಡಿ ಹೋದರು. ಹೀಗಾಗಿ ೧೮೯೧ರ ಖಾನೇಶುಮಾರಿಯಂತೆ ೮೦,೨೮೫ ಇದ್ದು, ೧೮೯೮ರ ಹೊತ್ತಿಗೆ ಸುಮಾರು ೯೦,೦೦೦ ಆಗಿರಬಹುದಾದ ಬೆಂಗಳೂರಿನ ಸಂಖ್ಯೆಯು ೧೮೯೮ರ ಡಿಸೆಂಬರ್‌ನಲ್ಲಿ ನಡೆಸಿದ ಎಣಿಕೆಯಂತೆ ೪೮,೨೩೬ಕ್ಕೆ ಇಳಿದಿತ್ತು.[3] ಎಂದರೆ ೧೫,೦೦೦ ಜನರಾದರೂ ಊರು ಬಿಟ್ಟಿರಬೇಕೆಂದೂ ಅಧಿಕಾರಿಗಳು ಅಂದಾಜು ಮಾಡಿದ್ದರು.

1 ರಿಪೋರ್ಟ್ ಆನ್ ಪ್ಲೇಗ್ ಆಪರೇಶನ್ಸ್ ಇನ್ ದಿ ಮೈಸೂರ್ ಸ್ಟೇಟ್, ಬೆಂಗಳೂರು, ೧೮೯೯, ಪು.೧
2 ಅದೇ
3 ಅದೇ

ಚೀಫ್ ಪ್ಲೇಗ್ ಆಫೀಸರ್ ಕೊಟ್ಟ ವರದಿಯಂತೆ "ಜನರು ತೀವ್ರಭೀತಿಯ ಆಘಾತಕ್ಕೆ ಒಳಗಾಗಿದ್ದರು. ನಗರದ ಬಹಳಷ್ಟು ಭಾಗಗಳು ಬರಿದಾಗಿದ್ದವು. ಜೀವನಾವಶ್ಯಕ ವಸ್ತುಗಳು ಕ್ಷಾಮಕಾಲದ (ಏರಿದ) ಬೆಲೆಗೆ ಮಾರಾಟವಾಗುತ್ತಿದ್ದವು. ರೋಗಿಗಳನ್ನು ಮನೆಯಲ್ಲೇ ಬಿಟ್ಟು ಮನೆಮಂದಿಯೆಲ್ಲ ಓಡಿಹೋಗಿದ್ದರು. ಕೆಲವೊಮ್ಮೆ ರೋಗಿಗಳನ್ನು ಮನೆಯಲ್ಲೇ ಅವರ ಸಂಬಂಧಿಗಳು ಬೀಗ ಹಾಕಿಟ್ಟು ತಮ್ಮ ಸುರಕ್ಷಿತತೆಗಾಗಿ ಪಲಾಯನ ಮಾಡಿದ್ದರು. ಮೃತದೇಹಗಳನ್ನು ಬೀದಿಗಳಲ್ಲಿ ಅಥವಾ ಬೀಗಹಾಕಿದ ಮನೆಗಳ ಅಂಗಳಗಳಲ್ಲಿ, ಕೆಲವೊಮ್ಮೆ ಮುನಿಸಿಪಲ್ ಪಾಯಿಖಾನೆ ಅಥವಾ ಕಸದ ತೊಟ್ಟಿಗಳಲ್ಲಿ ಒಗೆಯುತ್ತಿದ್ದರು."[4]

ಬೆಂಗಳೂರಿನ ಜಿಲ್ಲಾಧಿಕಾರಿ ಹೇಳಿರುವಂತೆ, "ಗುರುತು ಹಿಡಿಯಲಾಗದಂತೆ ಮುಖವನ್ನು ವಿರೂಪಗೊಳಿಸಿ ಚಾಪೆ ಇಲ್ಲವೆ ಕಂಬಳಿಯಲ್ಲಿ ಗಂಟುಕಟ್ಟಿ ಎಸೆಯಲ್ಪಟ್ಟ ಮೃತದೇಹಗಳು ಚರಂಡಿಯಲ್ಲಿ ಸಿಗುವುದು ಸಾಮಾನ್ಯವಾಗಿತ್ತು....ಒಂದು ಮನೆಯಲ್ಲಿ ಮರಣ ಸಂಭವಿಸಿದರೆ ತೀರ ಹತ್ತಿರದ ಸಂಬಂಧಿಗಳೂ ಹೆಣದ ಹತ್ತಿರ ಸುಳಿಯದಾದರು. ಹೊರಕ್ಕೆಸೆದಿದ್ದ ಅಥವಾ ಎಸೆಯದೇ ಇದ್ದ ಪ್ರತಿಯೊಂದು ಮೃತದೇಹವನ್ನು ಸಾಗಿಸುವ ಕೆಲಸವನ್ನು ಸರಕಾರವೇ ಮಾಡಬೇಕಾಯಿತು."[5]

## ಉಪವಾಸದ ಅಂಚಿನಲ್ಲಿ

ಬೆಂಗಳೂರು ನಗರದ ಸ್ಥಿತಿಗತಿಯ ವರ್ಣನೆಯಂತೂ ಇನ್ನೂ ಭೀಕರ. "ಪ್ಲೇಗ್ ಪಿಡುಗಿನಿಂದಾಗಿ ವ್ಯಾಪಾರವು ಪೂರ್ತಿ ಸ್ಥಗಿತವಾಗಿತ್ತು. ಉದ್ಯೋಗವನ್ನು ಕಳೆದುಕೊಂಡುದರಿಂದಲೂ ಮಿತಿಮೀರಿದ ಬೆಲೆ ಏರಿಕೆಯಿಂದಲೂ ಜನರು ಉಪವಾಸ ನರಳುವ ಸ್ಥಿತಿಯ ಅಂಚಿನಲ್ಲಿದ್ದರು. ನಗರದಲ್ಲಿರುವ ಎರಡೂ ಉಗಿಚಾಲಿತ ಕಾರ್ಖಾನೆಗಳು (ಬಟ್ಟೆ ಗಿರಣಿ) ಪೂರ್ಣ ಪ್ರಮಾಣದಲ್ಲಿ ಕೆಲಸ ಮಾಡಲಾಗದೆ ನಷ್ಟಕ್ಕೊಳಗಾಗಿ ಷೇರುದಾರರಿಗೆ ಆ ವರ್ಷ ಡಿವಿಡೆಂಡ್ ನೀಡಲಾರದಾದವು. ನೇಕಾರರು ಮಗ್ಗವನ್ನು ತ್ಯಜಿಸಿ ಕೂಲಿ ಸಂಪಾದಿಸಲು ಮಣ್ಣು ಹೊರುವ ಕೆಲಸಕ್ಕೆ ಇಲ್ಲವೆ ಕೂಲಿನಾಲಿಗೆ ಹೋಗಬೇಕಾಗಿ ಬಂತು. ಸ್ಥಳೀಯ ಮುನಿಸಿಪಾಲಿಟಿಗಾದ ಕಂದಾಯದ ನಷ್ಟವೇ ೪೦,೦೦೦ ರೂ.ಗಳಷ್ಟು. ಮನೆಯಲ್ಲಿನ ದುಡಿಯುವವನ ಮರಣದಿಂದ ದುಃಖ ದಾರಿದ್ರ್ಯಗಳಿಗೆ ಕಾಯಂ ಆಗಿ ಒಳಪಟ್ಟ ಕುಟುಂಬಗಳ ಸಂಖ್ಯೆ ಸಣ್ಣದಲ್ಲ.[6]

ಪ್ಲೇಗ್ ಪಿಡುಗು ಹಳೆಯ ಬೆಂಗಳೂರಲ್ಲಲ್ಲದೆ ಕಂಟೋನ್ಮೆಂಟ್ ಪ್ರದೇಶದಲ್ಲೂ ಹರಡಿತ್ತು. ಬೆಂಗಳೂರು, ತುಮಕೂರು, ಕೋಲಾರ, ಮೈಸೂರು ಜಿಲ್ಲೆಗಳಿಗೂ ವ್ಯಾಪಿಸಿತ್ತು. "ಜನರನ್ನು ಒತ್ತಾಯದಿಂದ ಬೇರ್ಪಡಿಸುವ (ಸೆಗ್ರೆಗೇಶನ್) ಕ್ರಮ ಬೆಂಗಳೂರಿನ ಮಟ್ಟಿಗೆ ಘಾತುಕವಾಗಿ ಪರಿಣಮಿಸಿತು" ಸಾಕಷ್ಟು ಸಂಖ್ಯೆಯಲ್ಲಿ ಜನ ನಗರದಿಂದ ಓಡಿಹೋಗುವಂತೆ ಮಾಡಿ ಈ ಸಾಂಕ್ರಾಮಿಕ ಪಿಡುಗು ಜಿಲ್ಲೆಯಲ್ಲೆಲ್ಲ ಹರಡುವಂತಾಗಲು ಈ ಕ್ರಮ ನೀಡಿದ ಒತ್ತಾಸೆ ಸಣ್ಣದೇನೂ ಅಲ್ಲ. ಬೇರ್ಪಡೆಯ ಕ್ರಮ ಅದನ್ನು ಕೈಕೊಂಡ ಉದ್ದೇಶಕ್ಕೆ ಘಾತಕವಾಗಿ ಪರಿಣಮಿಸಿತು" ಎಂದು ಸರಕಾರೀ ವರದಿ ಒಪ್ಪಿಕೊಂಡಿದೆ.[7] ಏಕೆಂದರೆ ರೋಗವು ಬೆಂಗಳೂರು ಜಿಲ್ಲೆಯ ಗ್ರಾಮಾಂತರ ಪ್ರದೇಶಗಳಲ್ಲೂ ತೀವ್ರವಾಗಿ ಹರಡಿತು. ರೋಗಗ್ರಸ್ತ ಇಲ್ಲವೇ ಸೋಂಕು ತಗಲಿ ವಸ್ತುಗಳನ್ನು ಹೊಂದಿದ ಜನರು ಬೆಂಗಳೂರಿನಿಂದ ಅಲ್ಲಿಗೆ ಓಡಿಹೋದುದೇ ಇದಕ್ಕೆ ಕಾರಣ. ಇದರಿಂದ ನಗರದ ಹೊರತಾಗಿ ಬೆಂಗಳೂರು ಜಿಲ್ಲೆಯ ಗ್ರಾಮಾಂತರ ಪ್ರದೇಶಗಳಲ್ಲೇ ೪,೪೭೨ ಜನ ಸಾವಿಗೀಡಾಗಿದ್ದು, ಈ ಪೈಕಿ ಚನ್ನಪಟ್ಟಣ ಊರಲ್ಲೆ ೭೦೦ ಜನರೂ ಹಾಗೂ ಆನೇಕಲ್ ಊರಲ್ಲಿ ೫೦೦ಕ್ಕೂ ಮೇಲ್ಪಟ್ಟು ಜನರೂ ಸಾವನ್ನಪ್ಪಿದರು.[8]

4 ಅದೇ, ಪು. ೩
5 ಅದೇ, ಪು. ೪
6 ಅದೇ, ಪು. ೬
7 ಅದೇ, ಪು. ೭
8 ಅದೇ, ಪು. ೧೫

## ನಗರದ ಆಧುನೀಕರಣ

ಇಂಥ ಭೀಕರ ದುರಂತ ನಡುವಿನಿಂದ ಆಧುನೀಕೃತವಾದ (ಮಾಡರ್ನ್ಯೈಸ್ಡ್) ವಿಸ್ತೃತವಾದ ಬೆಂಗಳೂರು ನಗರ ಉದಿಸಿತು. ಮೂಲತಃ ೫೦೦ ಎಕ್ರೆಗಳ ಪ್ರದೇಶವಾಗಿದ್ದ ಬೆಂಗಳೂರಿನಲ್ಲಿ ೪೪೦ ಎಕ್ರೆ ವಿಸ್ತೀರ್ಣದ ಬಸವನಗುಡಿ ಹಾಗೂ ೨೯೧ ಎಕ್ರೆ ವಿಸ್ತೀರ್ಣದ ಮಲ್ಲೇಶ್ವರಂ ಬಡಾವಣೆಗಳನ್ನು ಆಗಲೇ ರೂಪಿಸಲಾಯಿತು.[9] ವಿಶಾಲವಾದ ಬೀದಿಗಳು, ಸೂಕ್ತ ಚರಂಡಿ ಹಾಗೂ ಅವಶ್ಯ ಕನ್ಸರ್ವೆನ್ಸಿ ರಸ್ತೆಗಳುಳ್ಳ ಈ ಯೋಜಿತ ಬಡಾವಣೆಗಳಲ್ಲಿ ಸಾಕಷ್ಟು ಗಾಳಿ ಬೆಳಕಿನ ಅನುಕೂಲವುಳ್ಳ ನಿವೇಶನಗಳನ್ನು ಮಾಡಲಾಯಿತು.[10]

ನಗರದ ನೈರ್ಮಲ್ಯ ವ್ಯವಸ್ಥೆ ಸುಧಾರಿಸಲು ತೀವ್ರ ಕ್ರಮ ಕೈಗೊಳ್ಳಲಾಯಿತು. ವಾಸಕ್ಕೆ ಯೋಗ್ಯವಲ್ಲವೆಂದು ತೀರ ಹಳೆಯ ಕಾಲದ ೬೫೧ ಮನೆಗಳನ್ನು ಬೆಂಗಳೂರು ನಗರದಲ್ಲಿ ಕೆಡವಲಾಯಿತಲ್ಲದೆ ರಸ್ತೆ ಹಾಗೂ ಗಲ್ಲಿಗಳನ್ನು ಅಗಲಿಸಿ ಮನೆಗಳ ದಟ್ಟಣೆ ಕಡಿಮೆ ಮಾಡಲೆಂದು ೭೦೫, ಹೀಗೆ ಹಳೇ ಬೆಂಗಳೂರಲ್ಲಿ ಒಟ್ಟು ೧೩೫೬ ಮನೆಗಳನ್ನು ಕೆಡವಲಾಯಿತು.[11] (ಆಗ ಬೆಂಗಳೂರಲ್ಲಿ ಇದ್ದ ಒಟ್ಟು ಮನೆಗಳು ೧೭,೨೭೫). ಹಳೇ ತರಗುಪ್ಪೆಯನ್ನು ಅರ್ಧದಷ್ಟು ಕೆಡವಿ ಹಾಕಲಾಯಿತು.[12] ನಗರದ ಚರಂಡಿ ವ್ಯವಸ್ಥೆಯನ್ನು ಸುಧಾರಿಸಲೆಂದೇ ಒಂದು ಲಕ್ಷ ರೂ. ವಚ್ಚ ಮಾಡಲಾಯಿತು. ಇದಲ್ಲದೆ ನಗರದ ೮,೪೧೩ ಮನೆಗಳನ್ನು ಸೋಂಕು ಪ್ರತಿರೋಧ(ಡಿಸ್ ಇನ್ ಫೆಕ್ಶನ್)ಗೆ ಒಳಪಡಿಸಲಾಯಿತಲ್ಲದೆ ಗಾಳಿ ಬೆಳಕಿಲ್ಲದ ಅನೇಕ ಮನೆಗಳ ಛಾವಣಿಯನ್ನು ಹಾರಿಸಿ ಇಲ್ಲವೇ ಗೋಡೆಗಳಲ್ಲಿ ತೂತುಕೊರೆದು ಸುಧಾರಿಸಲು ಕ್ರಮ ಕೈಕೊಳ್ಳಲಾಯಿತು. ಮತ್ತು ಮನೆಗಳನ್ನು ಆರೋಗ್ಯದ ನಿಯಮಗಳಂತೆ ಕಟ್ಟಲು ಮುಂದೆ ಕಟ್ಟುನಿಟ್ಟಾದ ನಿಯಮಗಳನ್ನು ಜಾರಿಗೊಳಿಸಲಾಯಿತು.[13]

ಆರೋಗ್ಯ ಇಲಾಖೆಯಲ್ಲಿ, ಎಂದರೆ ಚಿಕಿತ್ಸಾ ವ್ಯವಸ್ಥೆಯಲ್ಲಿ, ತೀವ್ರ ಬದಲಾವಣೆಯಾಯಿತು. ಮೊದಲಬಾರಿ ನಗರಕ್ಕೆ ಒಬ್ಬ ಆರೋಗ್ಯಾಧಿಕಾರಿಯನ್ನು ೧೮೯೮ರಲ್ಲಿ ನೇಮಿಸಲಾಯಿತು.[14] ಇದಲ್ಲದೆ ಹಿಂದಿನ ಸಾಂಕ್ರಾಮಿಕ ರೋಗಗಳ ಆಸ್ಪತ್ರೆಯನ್ನು ಸರಕಾರೀ ಪ್ಲೇಗ್ ಆಸ್ಪತ್ರೆಯಾಗಿ ಖ್ಯಾತ ವೈದ್ಯ ಪಲ್ಪು ಅವರ ನೇತೃತ್ವದಲ್ಲಿ ಪರಿವರ್ತಿಸಲಾಯಿತು.[15] ಇದೇ ಹಿನ್ನೆಲೆಯಲ್ಲಿ ಬೆಂಗಳೂರು ನಗರದಲ್ಲಿ ಮುಂದೆ ಸುಸಜ್ಜಿತವಾದ ವಿಕ್ಟೋರಿಯಾ ಆಸ್ಪತ್ರೆಯನ್ನು ೧೯೦೦ರಲ್ಲಿ ತೆರೆಯಲಾಗಿ ಲಾರ್ಡ್ ಕರ್ಜನ್ ಅದನ್ನು ಉದ್ಘಾಟಿಸಿದರು.[16]

## ದೂರವಾಣಿ ಸಂಪರ್ಕ

ಪ್ಲೇಗ್ ನಿರೋಧ ಉಪಕ್ರಮಗಳ ಏಕಸೂತ್ರೀಕರಣಕ್ಕೆ ನೆರವಾಗಲು ಮೊದಲಬಾರಿ ನಗರದಲ್ಲಿ ದೂರವಾಣಿ ವ್ಯವಸ್ಥೆಯನ್ನು ಅತೀ ವ್ಯಾಪಕವಾಗಿ ಬಳಸಲಾಯಿತು.[17] ಮೊದಲು ಹೆಸರುಘಟ್ಟದಿಂದ ನೀರು ಪೂರೈಸುವ ಕೇಂದ್ರದೊಡನೆ ಸಂಪರ್ಕವಿರಿಸಲೆಂದು ಹೊಂದಿಸಲಾಗಿದ್ದ ದೂರವಾಣಿ ವ್ಯವಸ್ಥೆಯ ಹೊಸ ಜಾಲವನ್ನು ನಗರದಲ್ಲಿ ಪ್ಲೇಗ್ ನಿರೋಧದ ಉದ್ದೇಶಕ್ಕಾಗಿ ಹರಡಿ ಮುಂದೆ ಮರುವರುಷವೇ ಇದೇ ಜಾಲವನ್ನು ನಗರದ ೫೦ ಸರಕಾರೀ ಕಚೇರಿಗಳ ಸಂಪರ್ಕಕ್ಕೆ

---

9 ಅದೇ, ಪು. ೧೬
10 ಅದೇ, ಪು. ೧೫
11 ಅದೇ, ಪು. ೧೭
12 ಅದೇ, ಪು. ೨೦
13 ಅದೇ, ಪು. ೧೪
14 ಅದೇ, ಸ್ಟೇಟ್‌ಮೆಂಟ್, ಎಫ್
15 ಅದೇ
16 ಅದೇ, ಪು. ೧೨-೧೩
17 ಅದೇ, ಪು. ೬

ಕಾಯಂ ಆಗಿ ಬಳಸಿದ್ದು ನಗರದ ಆಧುನೀಕರಣದಲ್ಲಿ ಆದ ಒಂದು ತೀವ್ರ ಕ್ರಮ.[18] ದಿನವೊಂದಕ್ಕೆ ಸರಾಸರಿ ೧೨೨ ಕರೆಗಳು ಬಳಕೆಯಾಗುತ್ತವೆ ಎಂದು ಈ ಸಂಪರ್ಕದ ಬಗ್ಗೆ ೧೮೯೯–೧೯೦೦ರಲ್ಲಿ ಹೇಳಿದೆ.[19]

ಪ್ಲೇಗ್ ಪಿಡುಗಿನ ಹಿನ್ನೆಲೆಯಲ್ಲಿ ಬೆಂಗಳೂರಿನಲ್ಲಿ ಆದ ಇನ್ನೊಂದು ಮುಖ್ಯ ಸುಧಾರಣೆಯೆಂದರೆ ಹೋಟೆಲ್‌ಗಳ ಆರಂಭ. ಸರಕಾರೀ ನೌಕರರು ತಮ್ಮ ಕುಟುಂಬೀಯರನ್ನು ತಮ್ಮ ಊರುಗಳಿಗೋ ಹಳ್ಳಿಗಳಿಗೋ ಕಳುಹಿಸಿ ತಾವು ಮಾತ್ರ ಅನಿವಾರ್ಯವಾಗಿ ನಗರದಲ್ಲೇ ಉಳಿದಿರಲು ಅವರ ಊಟತಿಂಡಿಯ ವ್ಯವಸ್ಥೆಗಾಗಿ ಹೋಟೆಲ್‌ಗಳು ಆರಂಭವಾದುವೆಂದೂ ಹಾಗೆ ಆರಂಭ ಆದ ಹೋಟೆಲ್‌ಗಳಲ್ಲಿ ಮಾಡರ್ನ್ ಹಿಂದೂ ಹೋಟೆಲ್ ಒಂದೆಂದೂ ಡಾ. ಡಿವಿಜಿ ಹೇಳಿದ್ದಾರೆ. ಹೀಗೆ ಆರಂಭವಾದ ಅಲ್ಪ ಸಂಖ್ಯೆಯ ಈ ಹೋಟೆಲ್‌ಗಳು ಅವುಗಳ ಬೆಳೆ ವ್ಯಾಪಕವಾಗಿ ಬೆಳೆಯಲು ಹಾದಿಮಾಡಿಕೊಟ್ಟು ಬೆಂಗಳೂರಿನಲ್ಲಿ ಬರುವ ಪ್ರಯಾಣಿಕರಿಗೂ ಪ್ರವಾಸಿಗಳಿಗೂ ಅನುಕೂಲವಾದುವು.[20]

ತನ್ನ ವೈಶಾಲ್ಯವನ್ನು ಎರಡು ಪಟ್ಟಿಗೂ ಮಿಗಿಲಾಗಿ ಹೆಚ್ಚಿಸಿಕೊಂಡು,ಆಧುನಿಕ ವ್ಯವಸ್ಥೆಗಳ ನವ ಬಡಾವಣೆಗಳನ್ನು ಹೊಂದಿ,ನಗರದ ಒಳಗಣ ರಸ್ತೆಗಳ ಹಾಗೂ ಚರಂಡಿಗಳ ಜಾಲದ ವ್ಯವಸ್ಥೆ, ನೈರ್ಮಲ್ಯದ ಪ್ರಜ್ಞೆ ಹಾಗೂ ಸವಲತ್ತುಗಳಲ್ಲಿ ಸುಧಾರಣೆಯನ್ನೂ ಪಡೆದು ಆಧುನಿಕ ಚಿಕಿತ್ಸಾ ಸೌಲಭ್ಯ, ಸಂಪರ್ಕ ಸಾಧನಗಳನ್ನು ಅಳವಡಿಸಿಕೊಂಡು ಬೆಂಗಳೂರು ಸುಧಾರಿತ ನವನಗರವಾಗಿ ಬೆಳೆಯಲು ಭಯಾವಹವಾದ ಪ್ಲೇಗ್ ಪಿಡುಗು ಹಾದಿಮಾಡಿ ಕೊಟ್ಟಿತು. ಪ್ಲೇಗ್ ಒಂದು ರೀತಿಯಲ್ಲಿ ಛದ್ಮ ವೇಶದಲ್ಲಿ ಬಂದ ಉಪಕಾರಿಯಾಯಿತು. ಬೆಂಗಳೂರಿನ ಮರುಹುಟ್ಟಿಗೂ ಹೊಸಹುಟ್ಟಿಗೂ ಕಾರಣವಾಯಿತು.

ಈ ಪ್ರಬಂಧವನ್ನು ಬರೆದ ನಂತರ ಕಂಟೋನ್ಮೆಂಟ್ ಪ್ರದೇಶದ ಬಗ್ಗೆ ಕೆಲವು ವಿವರ ಅದೇ ವರ್ಷಕ್ಕೆ ಸಂಬಂಧಿಸಿ ದೊರೆತಿವೆ: ಅಲ್ಲಿ ೧೮೯೮ ಸೆಪ್ಟೆಂಬರ್ ೧ರಿಂದ ಆರಂಭಿಸಿ ೧೮೯೯ ಮಾರ್ಚ್‌ವರೆಗೆ ೩,೩೨೧ ಜನ ಸತ್ತರು. ಅಲ್ಲಿನ ಆಸ್ಪತ್ರೆಯ ನೌಕರರೆಲ್ಲ ಕೆಲಸಬಿಟ್ಟು ಓಡಿಹೋದರು. ಕಸಗುಡಿಸುವವರೂ ತಲೆಮರೆಸಿಕೊಂಡರು, ಎಂದು ಬೆಂಗಳೂರು ಕಂಟೋನ್ಮೆಂಟ್‌ನ ವಾರ್ಷಿಕ ವರದಿ ೧೮೯೮–೯೯, ಪುಟ ೯ರಲ್ಲಿ ಹೇಳಿದೆ. ಮರುವರ್ಷವೂ ಪ್ಲೇಗ್‌ನಿಂದ ೩೪೮ ಸಾವುಗಳಾದುವೆಂದು ಮರುವರ್ಷದ ಅದೇ ವರದಿಯ ಪುಟ ೨೭ ಹೇಳುತ್ತದೆ.

---

18 ಅದೇ, ಪು. ೮

19 ಎಡ್ಮಿನಿಸ್ಟ್ರೇಶನ್ ರಿಪೋರ್ಟ್ ಆಫ್ ದಿ ಮೈಸೂರ್ ಪಬ್ಲಿಕ್ ವರ್ಕ್ಸ್ ಡಿಪಾರ್ಟ್‌ಮೆಂಟ್, ೧೮೯೯-೧೯೦೦, ಪ್ಯಾರಾ ೧೯

20 ಜ್ಞಾಪಕ ಚಿತ್ರಶಾಲೆ